


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 26-03-2021 ಪ್ರಶ್ನೆ ಸಂಖ್ಯೆ : 1947(2289)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಪಿ. ಆರ್. ರಮೇಶ್(ನಾಮನಿರ್ದೇಶನ ಹೊಂದಿದವರು)

ಉತ್ತರ ನೀಡಬೇಕಾದ ದಿನಾಂಕ : 26-03-2021

ಉತ್ತರಿಸುವ ಸಚಿವರು: ಮಾನ್ಯ ಉಪ ಮುಖ್ಯಂತ್ರಿಗಳು ಹಾಗೂ ಸಾರಿಗೆ ಸಚಿವರು

ವಿಷಯ : ಬೆಂಗಳೂರು ಮಹಾನಗರದಲ್ಲಿ ಸಾರ್ವಜನಿಕ ಸಂಚಾರ ವಾಹನಗಳ ಕುರಿತು

(ಅ) ಬೆಂಗಳೂರು ಮಹಾನಗರದಲ್ಲಿ ದೈನಂದಿನವಾಗಿ ಸಂಚಾರ ನಡೆಸುವ ವಾಹನಗಳ ಅಂದಾಜು ಸಂಖ್ಯೆ ಎಷ್ಟು; ಈ ಪೈಕಿ ಸಾರ್ವಜನಿಕ ಸಂಚಾರ ಸೇವೆಯಲ್ಲಿ ತೊಡಗಿರುವ ಬಸ್ಸು ಟ್ಯಾಕ್ಸಿ ಮತ್ತು ಆಟೋರಿಕ್ಷಾಗಳ ಹಾಗೂ ಇತರೆ ವಾಹನಗಳ ಸಂಖ್ಯೆ ಎಷ್ಟು; (ವಿವರ ನೀಡುವುದು)

(ಆ) ಸದರಿ ಬಸ್ಸು, ಟ್ಯಾಕ್ಸಿ ಮತ್ತು ಅಟೋರಿಕ್ಷಾ ವಾಹನಗಳ ಚಾಲಕರು ಸಂಚಾರ ನಿಯಮಗಳನ್ನು ಉಲ್ಲಂಘಿಸಿ ಮೊಬೈಲ್‌ನಲ್ಲಿ ಮಾತನಾಡುತ್ತ ವಾಹನಗಳನ್ನು ಚಾಲನೆ ಮಾಡುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಪೊಲೀಸ್ ಇಲಾಖೆಯಿಂದ ಸಾರಿಗೆ ಇಲಾಖೆಗೆ ಎಷ್ಟು ಪ್ರಕರಣಗಳ ಕುರಿತು ವರದಿ ಸಲ್ಲಿಸಿರುತ್ತಾರೆ; (ವಿವರ ನೀಡುವುದು)

(ಇ) ನಮ್ಮ ಮೆಟ್ರೋ ರೈಲು ನಿಲ್ದಾಣದಿಂದ ಸಾರ್ವಜನಿಕರಿಗೆ ತಮ್ಮ ಪ್ರದೇಶಕ್ಕೆ ತಲುಪಲು (Last Mile Connectivity) ಸರ್ಕಾರದಿಂದ ಸಾರ್ವಜನಿಕ ಸಾರಿಗೆ ಸಂಪರ್ಕ ಜಾಲ ರೂಪಿಸಲಾಗಿದೆಯೇ; ರೂಪಿಸಿದ್ದಲ್ಲಿ, ನಮ್ಮ ಮೆಟ್ರೋ ಹಾಗೂ ಸಾರಿಗೆ ಇಲಾಖೆ ಸಮನ್ವಯ ಸಮಿತಿ ರಚಿಸಲಾಗಿದೆಯೇ; (ವಿವರ ನೀಡುವುದು)

(ಈ) ಬೆಂಗಳೂರು ನಗರದಲ್ಲಿ ವಾಹನ ಸಂಚಾರ ದಟ್ಟಣೆಯನ್ನು (Traffic Density) ತಿಳಿಗೊಳಿಸಿ ಯೋಜನಾಬದ್ದವಾಗಿ ರಸ್ತೆಗಳನ್ನು ನಿರ್ವಹಿಸಿ ಸಂಚಾರ ಸುಗಮಗೊಳಿಸುವ ಸಮಗ್ರ ಯೋಜನೆ ಸಿದ್ದಪಡಿಸಲಾಗಿದೆಯೇ; (ವಿವರ ನೀಡುವುದು)

(ಉ) ಈ ವಿಷಯದಲ್ಲಿ ಬಿ.ಬಿ.ಎಂ.ಪಿ., ನಗರ ಸಂಚಾರ ಆರಕ್ಷಕ ವಿಭಾಗ ಪರಿಸರ ಮಾಲಿನ್ಯ ನಿಯಂತ್ರಣ ಇಲಾಖೆ ಮತ್ತು ಜಿಲ್ಲಾಡಳಿತದ ಜೊತೆಗೆ ಸಮನ್ವಯ ಸಾಧಿಸುವ ವ್ಯವವಸ್ಥೆ ಇದೆಯೇ? (ಇದ್ದಲ್ಲಿ, ಕೈಗೊಂಡ ಕ್ರಮಗಳ ಕುರಿತು ವಿವರ ನೀಡುವುದು)